ಒಂದಾಣೆ ಮಾಲೆ. 275

# ಎಳೆಯರ ಗೆಳೆಯ

## (ಮಕ್ಕಳ ಹಾಡುಗಳು)



ರಚಯಿತ:

ಪಿ. ಸೀತಾರಾಮಭಟ್ಟ, ಮಿತ್ತಬೈಲ್.



1960

ಬೆಲೆ: ಆಣೆ ೧.

ಒಂದಾಣೆ ಮಾಲೆ — ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1960ನೇ ಜೂನ್ ತಿಂಗಳ ಎರಡನೆಯ ವಾರದ ವರೆಗೆ 275 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

275 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 5806 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

# ಎಳೆಯರ ಗೆಳೆಯ
## (ಮಕ್ಕಳ ಹಾಡುಗಳು)

---

### ಸ್ವಾಗತ ಗೀತೆ

ಸ್ವಾಗತಂ ಸು–ಸ್ವಾಗತಂ
ಸ್ವಾಗತಂ ಸು–ಸ್ವಾಗತಂ

ಸ್ವಾಗತವಿದೊ—ಅಧ್ಯಕ್ಷರಿಗೆ
ವಿದ್ಯಾಪ್ರೇಮಿಗಳೆಲ್ಲರಿಗೆ
ಆನಂದೋತ್ಸವದಿಂದಿನ ಶುಭದಿನ
ಬಂದು ನೆರೆದ ನಿಮಗೆಲ್ಲರಿಗೆ
ಸ್ವಾಗತಂ ಸು–ಸ್ವಾಗತಂ ॥ ೧ ॥

ಹಳ್ಳಿಯ ನಮ್ಮಾ ಶಾಲೆಯನು
ಬಾಲರ ಬಳಗದ ಲೀಲೆಯನು
ನೋಡಿ ಹಾಡಿಕೊಂಡಾಡಲು ಮುದದಲಿ
ಕೂಡಿದ ಸಜ್ಜನರೆಲ್ಲರಿಗೆ
ಸ್ವಾಗತಂ ಸು–ಸ್ವಾಗತಂ ॥ ೨ ॥

ಶಾಲೆಯ ಹಿತರಕ್ಷಣೆ ಬಯಸಿ
ಕಿರಿಯರಾದ ನಮ್ಮನ್ನು ಹರಸಿ
ಪ್ರೋತ್ಸಾಹಿಸಲೈತಂದ ಸಕಲರಿಗು
ನಮ್ಮಯ ಹಾರ್ದಿಕ ಸ್ವಾಗತಂ
ಸ್ವಾಗತಂ ಸು–ಸ್ವಾಗತಂ ॥ ೩ ॥

**ವಿ. ಸೂ:—ಶಾಲೆಗಳಲ್ಲಿ ನಡೆಯುವ ಸಭೆ, ಸಮಾರಂಭಗಳ ಸಂದರ್ಭಗಳಲ್ಲಿ ಮಕ್ಕಳಿಂದ ಈ ಕವಿತೆಯನ್ನು ಹಾಡಿಸಬಹುದು.**

---

## ನಾನೂ ಗಾಂಧಿಯಾಗುವೆ

(ಅಭಿನಯ ಗೀತೆ)




ಖಾದಿಪಂಚೆ ಉಟ್ಟುಕೊಂಡು
ಕನ್ನಡಕವ ಇಟ್ಟುಕೊಂಡು
ಹಾವುಗೆಗಳ ಮೆಟ್ಟಿಕೊಂಡು
ನಾನು ಗಾಂಧಿಯಾಗುವೆ
ಕೋಲನೂರಿ ನಗುತ ಬಂದು
ನಾನು ಗಾಂಧಿಯಾಗುವೆ ‖ ೧ ‖

ಪರರ ಹಿತವ ಬಯಸಿ ದುಡಿವೆ
ಅನ್ನಬಟ್ಟೆ ಗೆಯ್ದು ಪಡೆವೆ
ನಾಡಿಗಾಗಿ ಜೀವಕೊಡುವೆ
ನಾನು ಗಾಂಧಿಯಾಗುವೆ
ಪ್ರೇಮದಿಂದ ಜಗವ ಗೆಲುವೆ
ನಾನು ಗಾಂಧಿಯಾಗುವೆ ‖ ೨ ‖

## ಹಣ್ಣು ಬೇಕೇ ನಿಮಗೆ?

ಹಣ್ಣು ಬೇಕೇ ನಿಮಗೆ ಹಣ್ಣು ಬೇಕೇ?
ಉತ್ತಮ ಜಾತಿಯ ಮಾವಿನ ಹಣ್ಣು
ಮಾಗಿದ ಒಳ್ಳೆಯ ಬಾಳೆಯ ಹಣ್ಣು
ಘಟ್ಟದಿ ಬೆಳೆದಿಹ ಕಿತ್ತಳೆ ಹಣ್ಣು
ಬನ್ನಿರಿ ಕೊಳ್ಳಿರಿ ಹಲಸಿನ ಹಣ್ಣು
ಹಣ್ಣು ಬೇಕೇ ನಿಮಗೆ ಹಣ್ಣು ಬೇಕೇ? ‖ ೧ ‖

ಇಲ್ಲಿದೆ ನೋಡಿರಿ ಪೇರಳೆ ಹಣ್ಣು
ರಾಶಿಯೆ ಬಿದ್ದಿದೆ ನೇರಳೆ ಹಣ್ಣು
ದೇಹಕೆ ಹಿತಕರ ಚಿಕ್ಕೂ ಹಣ್ಣು
ಬನ್ನಿರಿ ಕೊಳ್ಳಿರಿ "ಮುಸುಂಬಿ" ಹಣ್ಣು
ಹಣ್ಣು ಬೇಕೇ ನಿಮಗೆ ಹಣ್ಣು ಬೇಕೇ? ‖ ೨ ‖

ಈಕಡೆಯಲ್ಲಿದೆ ಗೇರೂಹಣ್ಣು
ಮದ್ದಿಗೆ ಬೇಕಿದು ನಿಂಬೆಯ ಹಣ್ಣು
ಸೀತಾಫಲ, ದಾಳಿಂಬೇ ಹಣ್ಣು
ಬನ್ನಿರಿ ಕೊಳ್ಳಿರಿ ಬುಗರೀ ಹಣ್ಣು
ಹಣ್ಣು ಬೇಕೇ ನಿಮಗೆ ಹಣ್ಣು ಬೇಕೇ? ‖ ೩ ‖

ಶಿ. ಸೂ:—ಮಕ್ಕಳಿಗೆ ಫಲವಸ್ತುಗಳ ಪರಿಚಯವನ್ನು ಮಾಡಿಕೊಡುವಲ್ಲಿ ಈ ಕವಿತೆಯು ಉಪಯುಕ್ತವಾಗಿದೆ.

---

## ಚುಟುಕಗಳು

ಮೊಸರಲಿಲ್ಲ ಕಲ್ಲು
ಅಜ್ಜಗಿಲ್ಲ ಹಲ್ಲು
ಚೆಂಗುಲಾಬಿ
ಗಿಡದ ತುಂಬ
ಚುಚ್ಚುತಿರುವ ಮುಳ್ಳು ॥೧॥

ಹಾತೆ ಹಿಡಿಯೆ ಹಲ್ಲಿ
ಹೊಂಚುತಿದ್ದಿತಲ್ಲಿ
ಆಗ ಬಂದು
ಹಿಡಿದು ಕೊಂದು
ತಿಂದಿತದನು ಬಿಲ್ಲಿ ॥೨॥

ಪೋಲಿ ಹುಡುಗ ಮಲ್ಲ
ಕೋಳಿ ಕದ್ದ ಮೆಲ್ಲ
ಅವನ ನೋಡಿ
ಜನರು ಕೂಡಿ
ಹಿಡಿದು ಹೊಡೆದರೆಲ್ಲ ॥೩॥

ರಾಜರೊಡನೆ ದಂಡು
ಚಿಣ್ಣರಿಂಗೆ ಚೆಂಡು
ಅರಳಿ ನಗುವ
ಹೂವಿನಲ್ಲಿ
ಸೊದೆಯು ಸವಿಯು ಬಂಡು ॥೪॥

---

## ಹುಟ್ಟು ಹಬ್ಬ

ಬಂದಿತೆನ್ನ ಹುಟ್ಟುಹಬ್ಬ
ಎಷ್ಟು ಹರುಷವು!
ಬಂಧುಬಳಗದವರಿಗೆಲ್ಲ
ಭಾರಿ ತೋಷವು ॥೧॥

ಹಿರಿಯಕಿರಿಯರೆಲ್ಲ ಅಂದು
ಮನೆಯೊಳಿರುವರು.
ಅಣ್ಣ ಅಕ್ಕ ಭಾವ ಮಾವ
ಬಂದೆ ಬರುವರು ॥೨॥

ಬಣ್ಣ ಬಣ್ಣದುಡುಗೆಯೆನಗೆ
ಉಡಿಸಲಿರುವರು
ಎನಿತೊ ಚಿನ್ನದೊಡವೆಗಳನು
ತೊಡಿಸಲಿರುವರು ॥೩॥

ಹರಸುತೆನಗೆ ಹಿರಿಯರೆಲ್ಲ
ಮೆಚ್ಚು ಕೊಡುವರು
ಕಿರಿಯರೆಲ್ಲ ತೋಷದಲ್ಲಿ
ಪಾಲುಗೊಳುವರು ॥ ೪ ॥

ಅಂದಿನೆಮ್ಮ ಹಬ್ಬದೂಟ
ಭಾರಿ "ಗಮ್ಮತು"
ನಮ್ಮ ಹರುಷ ಹೇಳಲೆನಗೆ
ಮಾತೇ ಸಿಕ್ಕದು ॥ ೫ ॥

---

## ಗೋ ಮಾತೆ



ಗೋಮಾತೆ ನಿಂದಿಹಳು
ಬಾ ತಮ್ಮ ನೋಡು
ಅವಳಡಿಗೆ ಬಕುತಿಯಲಿ
ವಂದನೆಯ ಮಾಡು ॥ ೧ ॥

ಗಿರಿಬಯಲು ತಿರಿತಿರಿದು
ಹುಲ್ಲು ಮೇಯುವಳು
ಕೆರೆ ತೊರೆಗಳಲಿ ಹರಿವ
ನೀರ ಕುಡಿಯುವಳು ॥ ೨ ॥

ಉತ್ತಮೋತ್ತಮವಾದ
ಹಾಲ ನೀಡುವಳು
ಗೊಬ್ಬರಕೆ ಸೆಗಣಿಯನು
ತಾನೆ ಕೊಡುತಿಹಳು ॥ ೩ ॥

ಉಳಲೆಮಗೆ ಹೋರಿಗಳು
ಸಿಗುವುವವಳಿಂದ
ಮುಂದೆ ಹಾಲನು ಕೊಡುವ
ಹಸುಗಳವಳಿಂದ ॥ ೪ ॥

ಗೋಮಾತೆ ಜಗಕೆ ಬಲು
ಉಪಕಾರಿಯಣ್ಣ
ಆಕೆಯನು ಮಮತೆಯಲಿ
ಸಾಕುವುದು ಚೆಣ್ಣ ॥ ೫ ॥

---



## ಗಡಿಯಾರ

ದಿನ ದಿನ ಚಣಚಣವೆಣಿಸುತವ ಬರುವೆ
ಜನತೆಗೆ ಸಮಯವ ತೋರಿಸುತಿರುವೆ
ಸೂಚನೆ ಕಾಯದೆ ನಿತ್ಯವು ಗೇಯುವೆ
ಟಿಕ್ ಟಿಕ್ ಟಿಕ್ ಟಿಕ್ ಟಿಕ್ ಟಿಕ್ ಟಿಕ್ ॥ ೧ ॥

ಸೆಕೆಯೋ ಚಳಿಯೋ ಯಾವುದೆಯಿರಲಿ
ಸುಖವೇ ದುಃಖವೆ ಯೇನೇ ಬರಲಿ
ನೀನಾ ಗೊಡವೆಯಿಲ್ಲದೆ ದುಡಿವೆ
ಟಿಕ್ ಟಿಕ್ ಟಿಕ್ ಟಿಕ್ ಟಿಕ್ ಟಿಕ್ ಟಿಕ್ ॥ ೨ ॥

ಸಂದಿಹ ನಿಮಿಷವದೆಂದಿಗು ಬರದು
ಕಾಲದ ಬೆಲೆ ನಿಜರತುನಕು ಹಿರಿದು
ಜತನದಿ ವೇಳೆಯ ಕಳೆಯೆಂದೆನುವೆಯ?
ಟಿಕ್ ಟಿಕ್ ಟಿಕ್ ಟಿಕ್ ಟಿಕ್ ಟಿಕ್ ಟಿಕ್ ॥ ೩ ॥

---

## ಚುಟುಕ

ಚಿಕ್ಕ ಹುಡುಗ ಕಿಟ್ಟ
ಸ್ವಲ್ಪ ಓದಿ ಬಿಟ್ಟ
ಎಲ್ಲ ಕಲಿತೆ
ನೆಂದು ತಾನು
ಹೆಮ್ಮೆ ತಾಳಿ ಕೆಟ್ಟ.

---

## ತರಕಾರಿ ವ್ಯಾಪಾರಿ

ನಾನು ಒಬ್ಬ ತರಕಾರಿಯ ವ್ಯಾ-ಪಾ-ರೀ
ನನ್ನ ಹೆಸರು ಕೇಳಿಕೊಳ್ಳಿ ಹಮದೆ ಬ್ಯಾರಿ.
ಬಗೆಯ ಬಗೆಯ ಕಾಯಿಪಲ್ಯ ನನ್ನಲ್ಲಿವೆ
ಕಡಿಮೆ ಬೆಲೆಯ ಒಳ್ಳೆಮಾಲು ಇಲ್ಲೇ ಇದೆ.
ಬೆಂಡೆ, ಬದನೆ, ಅಲಸಂ–ಡೆ, ಸೌತೆ ಕಾ–ಯಿ
ಹೀರೆ ಸೋರೆ ಕುಂಬಳವು ಚೀನಿಕಾ–ಯಿ.
ಹಾಗಲವೆ? ಪಡುವಲವೇ? ಬೇಕು ಏನು?
ಹರಿವೆ, ಬಸಳೆ, ನುಗ್ಗೆ ಬೇಕೆ? ಕೊಡುವೆ ನಾ-ನು.
“ಮಾಲು” ನೋಡಿ ಕಾಸು ಕೊಡಿ ಚರ್ಚೆ ಬೇಡ
ಮೋಸ ಮಾಡಲೊಲ್ಲೆ ನಾನು ಚಿಂತೆ ಬೇಡ.
ಬೇಗ ಬಂದು ಕಾಯಿಪಲ್ಯ ಕೊಂಡುಕೊಂಡು
ರುಚಿಯ ಪಲ್ಯದೂಟವುಣಿರಿ ತೋಷಗೊಂಡು.

ವಿ. ಸೂ:—ಮಕ್ಕಳಿಗೆ ನಾನಾ ರೀತಿಯ ಸೊಪ್ಪು ತರಕಾರಿಗಳ ಪರಿಚಯಮಾಡಿಸು ವಲ್ಲಿ ಈ ಪದ್ಯವು ಸಹಕಾರಿಯಾಗಬಹುದು.

---

## ಆಟವಾಡುವ

ರಾಮಾ, ಕೃಷ್ಣ, ಮುಕುಂದ, ಸುಂದರ
ಎಲ್ಲರು ವೊಂದೆಡೆ ಕೂಡೋಣ
ಲಿಲ್ಲೀ, ಬೀಬಿ, ವಸಂತಿ, ಭಾರತಿ
ಎಲ್ಲರು ಬನ್ನಿರಿ ಆಡೋಣ ॥ ೧ ॥

ಆಟವನಾಡಲು, ನಮ್ಮಯ ದೇಹದ
ಅಂಗಗಳೆಲ್ಲವು ಬಲಿಯುವುವು
ಆರೋಗ್ಯದ ಹೊಸ ಕಳೆಯನು ಹುರುಪನು
ತಳೆಯುತ ದಿನದಿನ ಬೆಳೆಯುವುವು ॥ ೨ ॥

ಹಲವರ ಜೊತೆಯಲಿ ಕೂಡಿಯೆ ನಡೆಯಲು
ಭೇದದ ಭಾವನೆಯಳಿಯುವುದು
ಬೇರೆಯವರನೂ ತನ್ನೊಲು ಕಾಣುತ
ಮನಸು ವಿಶಾಲತೆ ಪಡೆಯುವುದು ॥ ೩ ॥

ಗೆಳೆಯರು ಗೆಳತಿಯರೆಲ್ಲರು ಬನ್ನಿರಿ
ತೋಷದಿ ನಲಿನಲಿದಾಡೋಣ
ತನು ಮನದಲಿ ನವ ಚೇತನ ಚಿಮ್ಮಲಿ
ನಾಡಿನ ಸೇವೆಯ ಮಾಡೋಣ ॥ ೪ ॥

---

## ಮಕ್ಕಳಿಗೆ

ಬನ್ನಿರಣ್ಣ ಬನ್ನಿರಕ್ಕ
ಬನ್ನಿ ಹೋಗುವ
ಸ್ಲೇಟು "ಬೂಕು" ಹಿಡಿದು ಕೊಂಡು
ಶಾಲೆ ಸೇರುವ ॥ ೧ ॥

ಶಾಲೆ ಸೇರಿ ಮಕ್ಕಳೊಡನೆ
ಓದು ಕಲಿಯುವ
ಹುರುಪಿನಿಂದ ಓದಿ ಬರೆದು
ಜಾಣರಾಗುವ ॥ ೨ ॥

ವಿದ್ಯೆ ಬುದ್ಧಿ ಕಲಿಸಲೆಮಗೆ
ಗುರುಗಳಿರುವರು
ಗೆಳತಿ ಗೆಳೆಯರೆನಿತೊ ಮಂದಿ
ಅಲ್ಲಿಯಿರುವರು ॥ ೩ ॥

ನೋಡಿ, ಓದಿ, ಕೇಳಿ ತಿಳಿದು
ಬುದ್ಧಿ ಬೆಳೆವುದು
ಆಟಕೂಟಗಳಲಿ ಹಿಗ್ಗಿ
ಮನವು ನಲಿವುದು ॥ ೪ ॥

ಮೇಲು–ಕೀಳು ಭೇದಭಾವ
ಅಲ್ಲಿ ಮರೆವುದು
ಹಲವರೊಡನೆ ಹೊಂದಿಕೊಂಡು
ನಡೆಯೆ ತಿಳಿವುದು ॥ ೫ ॥

ಯೋಗ್ಯರೆನಿಸಬೇಕು ನಾವು
ನಡೆವ ಶಾಲೆಗೆ
ನಮ್ಮ ಬಾಳು ಕೀರ್ತಿ ತರಲಿ
ನಮ್ಮ ನಾಡಿಗೆ ॥ ೬ ॥

## ಟಿಪ್ಪುಸುಲ್ತಾನ

"ಮೈಸೂರಿನ ಹುಲಿ"ಯೆನ್ನುವ ಬಿರುದಿನ
ಗಂಡುಗಲಿಯೆ ಟಿಪ್ಪು
ಕನ್ನಡ ನಾಡಿನ ಕೆಚ್ಚಿನ ಕೇಸರಿ!
ಹೆಸರಿದು ನಿನಗೊಪ್ಪು ॥ ೧ ॥

ಹೈದರ ಆಲಿಯು ಸಾವನ್ನೈದಿರೆ
ಗದ್ದುಗೆಯೇರಿದ್ದೆ.
ಬಿಳಿಯರ ಸೇನೆಯು ರಾಜ್ಯವ ಮುತ್ತಿರೆ
ಧೈರ್ಯದಿ ಕಾದಿದ್ದೆ ॥ ೨ ॥

ನಿನ್ನಯ ಶೌರ್ಯವ ಕಂಡಾ ವೈರಿಯು
ಬಗೆ ತಲ್ಲಣಿಸಿತ್ತು
ಪಾಪಕೆ ಬೆದರದೆ ಮೋಸದ ಬಲೆಯಲಿ
ನಿನ್ನನು ಕೆಡವಿತ್ತು ॥ ೩ ॥

ರಣಕಣದಲಿ ಹಗೆಗಳ ತಲೆದೂಗಿಸಿ
ಸೆಣಸಾಡಿದೆ ವೀರ
ದೇಶದ ಸ್ವಾತಂತ್ರ್ಯಕೆ ಪ್ರಾಣವನೇ
ಬಲಿಯೊಡ್ಡಿದೆ ಶೂರ ॥ ೪ ॥

ನಿನ್ನಯ ಜೀವನ ನಿಜಕೂ ಪಾವನ
ನಾಡಿನ ಜನಕೆಲ್ಲಾ
ನಿನ್ನಯ ಪುಣ್ಯಸ್ಮರಣೆಯೆ ಚೇತನ
ನೀಡುವುದೆಮಗೆಲ್ಲಾ ॥ ೫ ॥

---

## ನವಭಾರತ

ನವಭಾರತ
ನಮ್ಮ
ನವಭಾರತ
ಇಂದು ನಾವು ಕಟ್ಟಬೇಕು ನವಭಾರತ
ಜಗದಿ ತಲೆಯನೆತ್ತಬೇಕು ನವಭಾರತ ॥ ೧ ॥

ಐಕ್ಯಮತ್ಯದಿ
ನಾವು
ಸೋದರತ್ವದಿ
ತಾಯಸೇವೆಗೈವುದೆಂಬ ಹರ್ಷಚಿತ್ತದಿ
ನಾಡಹಿತವ ಬಯಸಿ ನಾವು ದುಡಿವ ನಿತ್ಯದಿ ॥ ೨ ॥

ದುಡಿಮೆ ಫಲಿಸಲಿ॥
ನಮ್ಮ
ದೇಶ ಬೆಳಗಲಿ॥
ಬಾಪು ಕಂಡ ರಾಮರಾಜ್ಯವಿಲ್ಲಿ ನೆಲೆಸಲಿ॥
ನಾಡಗುಡಿಯು ಮೇಲು ಮುಗಿಲನೇರಿ ಹಾರಲಿ॥ ॥ ೩ ॥

---

## ಬಿರುಗಾಳಿ

ಬಂದಿತು ಬಂದಿತು ಸುಂಟರಗಾಳೀ
ಭಾರೀ ಬಿರುಗಾಳೀ
ಭೂಮಿಯೆ ಬುಡಮೇಲಾಗುವುದೇನೋ
ಎಲ್ಲೆಲ್ಲೂ ಧೂಳೀ
ಇಸ್ಸೀ
ಎಲ್ಲೆಲ್ಲೂ ಧೂಳೀ ॥ ೧ ॥

ನೆಲದಲಿ ಹರಡಿದ ಕಸದಾರಾಶಿಯೆ
ಗಿರಗಿರ ತಿರುಗುತಿದೆ
ಚದರಿದ ತರಗೆಲೆ ಹಾರುತ ಸರಸರ
ಮೇಲಕೆ ಏರುತಿದೆ
ಎದ್ದೂ॥
ಕೆಳಗೇ ಬೀಳುತಿದೆ ॥ ೨ ॥

ಗಿಡಮರಬಳ್ಳಿಗಳೆಲ್ಲವು ಗಾಳಿಗೆ
ಥರಥರ ನಡುಗುತಿವೆ
ಜೋಲುತ ವಾಲುತ ಮಿಡಿಹೂಹಣ್‌ಗಳ
ಪಟಪಟ ಕೆಡವುತಿವೆ
ನೋಡದೊ
ತಲೆ ತಾಟಾಡಿಸಿವೆ ॥ ೩ ॥

ಹಂಚಿನ ಮನೆಗಳು ಬಡಗುಡಿಸಲುಗಳು
ಗಾಳಿಗೆ ಬಲಿಬಿದ್ದು
ನಾಡೇ ಹಾರಿದೆ ಗೋಡೆಯೆ ಜರಿದಿದೆ
ಮರ ಮೇಲಕೆ ಬಿದ್ದು
ಅಬ್ಬಾ!
ಸುತ್ತೆಲ್ಲಾ ಸದ್ದು! ॥ ೪ ॥

ನೆರೆದಿಹ ಖಗಮೃಗ ನೋಡುತ ಮುಖಮುಖ
ನಡುಗುತಲಿವೆ ಹೆದರಿ
ಮನೆಮನೆಗಳ ಜನಮನದಲಿ ದೇವನ
ನೆನೆಯುತಿಹರು ಬೆದರಿ!
ಬಾಗುತ
ಪೊರೆ ಶಿವಯೆಂದೊದರಿ ॥ ೫ ॥

---

## ಹಳ್ಳಿಯತ್ತ ತೆರಳುವ

ಬನ್ನಿ ಬನ್ನಿ ಗೆಳೆಯರೆಲ್ಲ
ಹಳ್ಳಿಯತ್ತ ತೆರಳುವ
ಸೃಷ್ಟಿ ತಾಯ ತವರುಮನೆಯ
ಕಂಡು ಮೋದಗೊಳ್ಳುವ ॥ ೧ ॥

ಉಣಲು ಉಡಲು ಅನ್ನಬಟ್ಟೆ
ಹಳ್ಳಿಯಲ್ಲಿ ದೊರೆವುದು
ಶುದ್ಧ ಗಾಳಿ ಸ್ವಚ್ಛ ನೀರು
ಅಲ್ಲಿ ತಪ್ಪದಿರುವುದು ॥ ೨ ॥

ಆದರಿಂದು ಜನವು ದಿನವು
ಪೇಟೆಯತ್ತ ನಡೆದಿದೆ
ಹಳ್ಳಿಯಳಿದೆ ನಮ್ಮ ದೇಶ
ಕಷ್ಟನಷ್ಟ ಪಡುತಿದೆ ॥ ೩

ನಾಡಪಾಡು ತೊಲಗಬೇಕು
ನಮ್ಮ ಯತುನ ಮಾಡುವ
ದೇಶದೊಳಿತ ಬಯಸಿ ಮುದದಿ
ಕಾರ್ಯರಂಗಕಿಳಿಯುವ ॥ ೪ ॥

ರೈತರೊಡನೆ ಬೆರೆತು ಕಲೆತು
ರೈತರಾಗಿ ಬಾಳುವ
ಹಳ್ಳಿ–ದಿಲ್ಲಿಯಾಗುವಂತೆ
ದುಡಿದು ಯಶವ ಗಳಿಸುವ ॥ ೫ ॥

---



# ಚರಕ

ಚರಕವ ಹಿಡಿಯುವ ನಾವೆಲ್ಲಾ
ಚರಕವೆ ದೇವರು ನಮಗೆಲ್ಲಾ

ನಾಡಿನ ಜನತೆಯು ಚರಕವ ತಿರುಗಿಸೆ
ಬಡತನ ದೂರಕೆ ಓಡುವುದು
ನಾನಾ ಕಸಬಿನ ಹಳ್ಳಿಯ ಮಂದಿಗೆ
ಚರಕವೆ ಅನ್ನವ ನೀಡುವುದು ॥ ೧ ॥

ಹೊಲದಲಿ ಹತ್ತಿಯ ಬೆಳೆಸುವ ರೈತಗೆ
ಕೆಲಸವು ಸಿಕ್ಕುವುದಿದರಿಂದ
ಹತ್ತಿಯ ಹಿಂಜುವ ಸಂಸಾರಿಗರಿಗೆ
ದುಡಿಮೆಯು ದೊರೆಯುವುದಿದರಿಂದ ॥ ೨ ॥

ನೂಲುವ ನೇಯುವ ವೃತ್ತಿಯು ಜನರಿಗೆ
ಗಳಿಕೆಯು ಹೆಚ್ಚುವುದಿದರಿಂದ
ಹಳ್ಳಿಯ ಬಡಗಿಯು ಬಡಕಮ್ಮಾರನು
ದುಡ್ಡನು ಗಳಿಸುವರಿದರಿಂದ ॥ ೩ ॥

ಮಡಿಮಾಡುವ ಜನ, ರಂಗುಕೊಡುವ ಜನ
ಕಾಸನು ಕಾಣುವರಿದರಿಂದ
ಊರಿನವರ ಹಣ ಊರೊಳಗುಳಿದು
ಗ್ರಾಮೋದ್ಧಾರವೆ—ಇದರಿಂದ ॥ ೪ ॥

ಚರಕದ ಸೇವೆಯ ಗೈದರೆ—ನಮಗಿದು
ಬದುಕಿನ ದಾರಿಯ ತೋರುವುದು
ಚರಕವು ದಿನದಿನ ತಿರುಗುತಲಿದ್ದರೆ
ನಾಡೇ ನಂದನವಾಗುವುದು ॥ ೫ ॥



